# ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 566
2. ಸದಸ್ಯರ ಹೆಸರು : ಶ್ರೀ ವಿಜಯ ಸಿಂಗ್ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)
3. ಉತ್ತರಿಸಬೇಕಾದ ದಿನಾಂಕ : 19-07-2019
4. ಉತ್ತರಿಸುವ ಸಚಿವರು : ಮಾನ್ಯ ನಗರಾಭಿವೃದ್ಧಿ ಸಚಿವರು

| ಕ್ರ. ಸಂ. | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ಬೀದರ್ ನಗರದಲ್ಲಿ ದಿನದ 24 ಘಂಟೆ ಕುಡಿಯುವ ನೀರು ಪೂರೈಸುವ ಯೋಜನೆಯಡಿ ಎಷ್ಟು ವಾರ್ಡ್‌ಗಳಿಗೆ ನೀರು ಸರಬರಾಜು ಮಾಡಲಾಗುತ್ತಿದೆ; ಎಷ್ಟು ದಿನಕೊಮ್ಮೆ ನೀರು ಕೊಡಲಾಗುತ್ತಿದೆ; ನೀರು ಪೂರೈಕೆ ಸಮರ್ಪಕವಾಗಿ ಆಗುತ್ತಿಲ್ಲದಿರುವ ಬಗ್ಗೆ ದೂರುಗಳು ಇವೆ; ಇದನ್ನು ಸುಧಾರಿಸಲು ಏನು ಕ್ರಮ ಕೈಗೊಳ್ಳಲಾಗಿದೆ; ಬೀದರ್ ನಗರದ ಎಲ್ಲಾ ವಾರ್ಡ್‌ಗಳಿಗೆ ದಿನದ 24 ಘಂಟೆ ಪೂರೈಕೆ ಆಗುವುದು ಯಾವಾಗ; | ಬೀದರ್ ನಗರದ 35 ವಾರ್ಡ್‌ಗಳನ್ನು ಭೌಗೋಳಿಕವಾಗಿ ಹಾಗೂ ವೈಜ್ಞಾನಿಕವಾಗಿ 19 ವಲಯಗಳನ್ನಾಗಿ ವಿಂಗಡಿಸಲಾಗಿದೆ. ಪ್ರಸ್ತುತ ಹಾಲಿ ಎಲ್ಲಾ 19 ವಲಯಗಳಿಗೆ ನೀರಿನ ಅಭಾವದಿಂದಾಗಿ 2 ದಿನಕ್ಕೊಮ್ಮೆ ನೀರು ಸರಬರಾಜು ಮಾಡಲಾಗುತ್ತಿದೆ. NKUSIP ಯೋಜನೆಯಲ್ಲಿ 14 ವಲಯಗಳಲ್ಲಿ ದಿನದ 24 ಗಂಟೆ ನೀರು ಸರಬರಾಜಿಗೆ ಬೇಕಾದ ಎಲ್ಲಾ ಕಾಮಗಾರಿಗಳನ್ನು ಪೂರ್ಣಗೊಳಿಸಲಾಗಿದೆ. ಹಾಲಿ ಮೂಲಸ್ಥಾವರದಲ್ಲಿ ನೀರಿನ ಲಭ್ಯತೆ ಕಡಿಮೆಯಿರುವುದರಿಂದ 24/7 ನೀರು ಸರಬರಾಜು ಮಾಡಲು ಸಾಧ್ಯವಾಗುವುದಿಲ್ಲ. ನೀರಿನ ಲಭ್ಯತೆ ಹೆಚ್ಚಾದ ಕೂಡಲೇ ಈ 14 ವಲಯಗಳಿಗೆ ಹಂತ ಹಂತವಾಗಿ 24/7 ನೀರು ಸರಬರಾಜು ಮಾಡಲಾಗುವುದು. ಉಳಿದ 5 ವಲಯಗಳಿಗೆ ದಿನ ಬಿಟ್ಟು ದಿನ ನೀರು ಸರಬರಾಜು ಮಾಡಲಾಗುತ್ತಿದೆ.<br><br>ಕುಡಿಯುವ ನೀರಿನ ಸರಬರಾಜು ಬಗ್ಗೆ ದೂರುಗಳು ಈ ಕೆಳಕಂಡ ಕಾರಣಗಳಿಂದ ಬರುತ್ತಿದೆ:<br>• ಈ ಯೋಜನೆಯಡಿ ಅಳವಡಿಸಿರುವ ನೀರು ಸರಬರಾಜು ಮಾಡುವ ಕೊಳವೆಗಳನ್ನು ಅಲ್ಲಲ್ಲಿ ಬೇರೆ ನಗರಸಭೆಯ ಗುತ್ತಿಗೆದಾರರು ನಗರಸಭೆಯ ಅಭಿವೃದ್ಧಿ ಕಾಮಗಾರಿಗಳನ್ನು ನಿರ್ವಹಿಸುವಾಗ ಹಾಳು ಆಗುತ್ತಿರುವ ಕಾರಣದಿಂದ ಅಲ್ಲಲ್ಲಿ ನೀರಿನ ಸರಬರಾಜು ವ್ಯತ್ಯಯ ವಾಗುತ್ತಿರುವ ದೂರುಗಳು ಬರುತ್ತಿವೆ.<br>• ಈ ಬಗ್ಗೆ ಜಿಲ್ಲಾಧಿಕಾರಿಗಳಿಗೆ ಹಾಗೂ ನಗರಸಭೆ ರವರಿಗೆ ಮನವರಿಕೆ ಮಾಡಿಕೊಡಲಾಗಿದೆ ಹಾಗೂ ಸದರಿ ಹಾಳಾಗಿರುವ ಕೊಳವೆಗಳನ್ನು ದುರಸ್ತಿಪಡಿಸಲು ಆಗಿಂದಾಗಾಲೇ ಕ್ರಮಕೈಗೊಳ್ಳಲಾಗುತ್ತಿದೆ.<br><br>ನಗರದ ಎಲ್ಲಾ ನಾಗರೀಕರಿಗೆ ಸರ್ಮಪಕವಾಗಿ ನೀರು ಪೊರೈಸಲು 48 ಎಂ.ಎಲ್.ಡಿ ಅವಶ್ಯವಿರುತ್ತದೆ ಸಗಟು ಮಾಂಜ್ರ ನದಿಯಿಂದ ಇದ್ದ ವ್ಯವಸ್ಥೆಯನ್ನು ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ ದುರಸ್ತಿ ಕಾರಣದಿಂದ ಸ್ಥಗಿತಗೊಳಿಸಲಾಗಿರುತ್ತದೆ. ಈ ಕಾರಣದಿಂದ ಸಗಟು ನೀರು ಪ್ರಮಾಣ ಕಡಿಮೆಯಾಗಿರುತ್ತದೆ.<br><br>ಸಗಟು ಕಾರಂಜ ಸ್ಥಾವರದಲ್ಲಿ ಆಗಿಂದಾಗ್ಯೆ ವಿದ್ಯುತ್ ಅಡಚಣೆ ಇರುವ ಕಾರಣ ವಿನ್ಯಾಸದಂತೆ 28 ಎಂ.ಎಲ್.ಡಿ ನೀರು ಪಂಪ್ ಮಾಡುವ ಬದಲು ಸರಾಸರಿ ದಿನಂ ಪ್ರತಿ 16-18 ಎಂ.ಎಲ್.ಡಿ ಮಾತ್ರ ಪಂಪ್ ಮಾಡಲು ಸಾಧ್ಯವಾಗುತ್ತಿದೆ. |

| ಪ್ರ. ಸಂ. | ಪ್ರಶ್ನೆಗಳು | ಉತ್ತರಗಳು |
|---|---|---|
| | | ಈ ಎಲ್ಲಾ ಕಾರಣದಿಂದ 14 ವಲಯಗಳಿಗೆ 24/7 ನೀರು ಸರಬರಾಜು ಮಾಡುವ ಪ್ರಯತ್ನವು ಸಾಧ್ಯವಾಗುತ್ತಿಲ್ಲ. ಪ್ರಸ್ತುತ ಸಗಟು ನೀರು ಲಭ್ಯತೆ ಅನುಗುಣವಾಗಿ ದಿನ ಬಿಟ್ಟು ದಿನ (intermittent) ನೀರು ಸರಬರಾಜು ಮಾಡಲಾಗುತ್ತದೆ.<br><br>GESCOM ರವರೊಂದಿಗೆ ನಿರಂತರ ವಿದ್ಯುತ್ ಸರಬರಾಜು ಮಾಡುವ ಬಗ್ಗೆ ಒತ್ತಾಯಿಸಲಾಗುತ್ತಿದ್ದು, ನಿರಂತರ ವಿದ್ಯುತ್ ದೊರೆತ ತಕ್ಷಣ 14 ವಲಯಗಳಿಗೆ ದಿನ ಬಿಟ್ಟು ದಿನ (intermittent) ನೀರು ಸರಬರಾಜುನಿಂದ 24/7 ಮಾರ್ಪಡಿಸಿ ನೀರು ಸರಬರಾಜು ನೀಡಲು ಎಲ್ಲಾ ಪ್ರಯತ್ನವನ್ನು ಮಾಡಲಾಗುತ್ತದೆ. ಉಳಿದ 5 ವಲಯಗಳಲ್ಲಿ ದಿನ ಬಿಟ್ಟು ದಿನ (intermittent) ನೀರು ಸರಬರಾಜು ಮಾಡಲಾಗುವುದು. |
| ಆ) | ಬೀದರ್ ನಗರದಲ್ಲಿ ಒಳಚರಂಡಿ ಕಾಮಗಾರಿ ಪೂರ್ಣವಾಗಿದೆಯೆ; ಪೂರ್ಣವಾಗದಿದ್ದರೆ ವಿಳಂಬಕ್ಕೆ ಕಾರಣವೇನು; ಎಷ್ಟು ದಿನಗಳಲ್ಲಿ ಪೂರ್ಣವಾಗಲಿದೆ ಕಾಮಗಾರಿಗೆ ಇದುವರೆಗೆ ಖರ್ಚಾಗಿರುವ ಅನುದಾನ ಎಷ್ಟು? | ಬೀದರ್ ನಗರದಲ್ಲಿ ಎನ್‌ಕೆಯುಎಸ್‌ಐಪಿ ಯೋಜನೆಯಲ್ಲಿ ರೂಪಿಸಿರುವ ಒಳಚರಂಡಿ ಕಾಮಗಾರಿಗಳು ಪೂರ್ಣಗೊಂಡಿದ್ದು, ಈಗ ದೋಷ ನಿವಾರಣ ಅವಧಿಯಲ್ಲಿರುತ್ತದೆ. ಇದರ ಜೊತೆಗೆ ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯು ಅಮೃತ್ ಯೋಜನೆಯಡಿ ಉಳಿದ ಪ್ರದೇಶಗಳಿಗೆ ಕಾಮಗಾರಿಗಳನ್ನು ಕೈಗೊಂಡಿರುತ್ತಾರೆ.<br><br>ಎನ್‌ಕೆಯುಎಸ್‌ಐಪಿ ಯೋಜನೆಯಂತೆ 17 ದಶಲಕ್ಷ ಲೀ ಸಾಮರ್ಥ್ಯದ ಜಲ ತ್ಯಾಜ್ಯ ಸಂಸ್ಕರಣ ಘಟಕ (ಎಸ್.ಟಿ.ಪಿ), 82.85 ಕಿ.ಮೀ ಒಳಚರಂಡಿ ಜಾಲ ಮತ್ತು 3,905 ಜಲತ್ಯಾಜ್ಯ ಪಡೆಯುವ ಚೆಂಬರ್ ನಿರ್ಮಿಸಲಾಗಿದೆ. ಎಸ್.ಟಿ.ಪಿ ಘಟಕದಲ್ಲಿ ನೀರು ಸೋರುವಿಕೆ ಕಂಡುಬಂದಿದ್ದು ಗುತ್ತಿಗೆದಾರರಿಗೆ ನೋಟೀಸ್ ನೀಡಿ ದುರಸ್ತಿಪಡಿಸಲು ಕ್ರಮ ಕೈಗೊಳ್ಳಲಾಗಿದೆ.<br><br>ಜಲತ್ಯಾಜ್ಯ ಪಡೆಯುವ ಚೆಂಬರ್‌ಗೆ ಆಯಾ ಮನೆಗಳಿಂದ ಒಳಚರಂಡಿ ಸಂಪರ್ಕ ಕೆಲಸವು ನಗರಸಭೆವತಿಯಿಂದ ಪ್ರಗತಿಯಲ್ಲಿರುತ್ತದೆ. ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯ ಉಳಿದ ಒಳಚರಂಡಿ ಜಾಲ ಮತ್ತು ಮನೆಸಂಪರ್ಕವನ್ನು ಪೂರ್ಣಗೊಳಿಸುವ ಕಾಮಗಾರಿ ಪ್ರಗತಿಯಲ್ಲಿರುತ್ತದೆ.<br><br>ಈ ಎಲ್ಲಾ ಒಳಚರಂಡಿ ಸಂಪರ್ಕ ಕೆಲಸಗಳು ಮತ್ತು ಮನೆ ಸಂಪರ್ಕ ಪೂರ್ಣಗೊಂಡ ಮೇಲೆ ಸಾಕಷ್ಟು ಪ್ರಮಾಣದಲ್ಲಿ ಜಲ ತ್ಯಾಜ್ಯವು ಎಸ್.ಟಿ.ಪಿ ಗೆ ಹರಿದು ಬಂದ ಮೇಲೆ ಎಸ್.ಟಿ.ಪಿ.ಯು ಪರಿಣಾಮಕಾರಿಯಾಗಿ ವಿನ್ಯಾಸದಂತೆ ಕೆಲಸ ನಿರ್ವಹಿಸುತ್ತದೆ. ಇದುವರೆಗೆ ರೂ.53.14 ಕೋಟಿ ವೆಚ್ಚವಾಗಿರುತ್ತದೆ. |

ನಅಇ 147 ಪಿಆರ್‌ಜೆ 2019

(ಯು.ಟಿ.ಖಾದರ್)
ನಗರಾಭಿವೃದ್ಧಿ ಸಚಿವರು.